ಎಂ. ಎಲ್. ಶಿವಶಂಕರ

# ಚಿಕ್ಕಮಗಳೂರಿನಲ್ಲಿ ದೊರೆತ ಅಪೂರ್ವ ಹರಿಹರಮೂರ್ತಿ

ಹರಿಹರಮೂರ್ತಿಯ ಬಗ್ಗೆ ವಾಮನಪುರಾಣದಲ್ಲಿ ಪ್ರಸ್ತಾಪವಿದೆ. ವಿಷ್ಣು ಒಬ್ಬ ಋಷಿಗೆ ತಾನು ಹಾಗೂ ಶಿವ ಇಬ್ಬರೂ ಒಂದೇ ಎಂದು ತಿಳಿಸಿ ಆತನಿಗೆ ಹರಿಹರ ಮೂರ್ತಿಯ ಸ್ವರೂಪವನ್ನು ತೋರಿಸಿದನೆಂದು ಪ್ರತೀತಿ ಇದೆ.

ಶಿವ ಮತ್ತು ವಿಷ್ಣುವಿನಲ್ಲಿ ಯಾರು ಹೆಚ್ಚು ಎಂಬ ವಾಗ್ವಾದ ಆರಂಭಗೊಂಡಾಗ ಹರಿಹರಮೂರ್ತಿಯ ಸೃಷ್ಟಿ ಆಯಿತು. ಆದ್ದರಿಂದಲೇ ಹರಿಹರ ಮಹೋತ್ಸವಗಳಲ್ಲಿ ಶೈವರೂ, ವೈಷ್ಣವರೂ ಭಾಗವಹಿಸುತ್ತಾರೆ.

ಶಿಲ್ಪಶಾಸ್ತ್ರಗಳ ಪ್ರಕಾರ, ಹರಿಹರನ ಎಡಭಾಗ ಚಕ್ರ, ಶಂಖ, ಗದೆ, ಕಟಕಮುದ್ರೆ, ಶಿರೋಭಾಗದ ಅರ್ಧ ಭಾಗ ಸುಂದರವಾದ ಅಮೂಲ್ಯ ರತ್ನ ಸಹಿತವಾದ ಕಿರೀಟದಿಂದ ಕೂಡಿ, ಎಡ ಕಿವಿಯಲ್ಲಿ ಮಕರಕುಂಡಲ ಧರಿಸಿರಬೇಕು. ಕೇಯೂರ, ಕಂಕಣ ಮತ್ತು ಇತರ ಆಭರಣಗಳಿಂದ ಭುಜ ಅಲಂಕೃತವಾಗಿರಬೇಕು. ಬಲ ಗಾಲು ಸರ್ಪಾಕೃತಿಯಿಂದ, ಎಡಗಾಲು ಎಲ್ಲಾ ತರಹದ ಅಮೂಲ್ಯ ರತ್ನಗಳಿಂದ ಅಲಂಕೃತವಾಗಿರಬೇಕು. ವೈಷ್ಣವ ಭಾಗ ಹಳದಿ ಸಿಲ್ಕ್‌ವಸ್ತ್ರದಿಂದ ಅಲಂಕೃತವಾಗಿರ ಬೇಕು. ಶಿವನ ಭಾಗದ ಬಣ್ಣ ಮಂಜು ಬಿಳಿಯ ದಾಗಿ, ವಿಷ್ಣುವಿನ ಭಾಗ ಹಸಿರು ಅಥವಾ ಶ್ಯಾಮಲ ವರ್ಣದಿಂದಿರಬೇಕು. ಹರಿಹರಮೂರ್ತಿ ಸಮಭಂಗದಲ್ಲಿರ ಬೇಕು. ಬಲಭಾಗ ಭಯಂಕರವಾಗಿದ್ದು, ಎಡಭಾಗ ನಯವಾಗಿರಬೇಕು. ಶಿವನ ಭಾಗದ ಹಣೆಯಲ್ಲಿ ಮೂರ ನೆಯ ಕಣ್ಣು ಅರ್ಧಭಾಗ ಕಾಣುವ ಹಾಗೆ ಹಾಗೂ ಹರಿಹರಮೂರ್ತಿಯ ಹಿಂಭಾಗ ಶಿರಶ್ಚಕ್ರದಿಂದ ಅಥವಾ ಪ್ರಭಾವಳಿಯಿಂದ ಕೂಡಿರಬೇಕು.

ವಿಷ್ಣುಧರ್ಮೋತ್ತರಪುರಾಣದ ಪ್ರಕಾರ, ಹರಿಹರ ಮೂರ್ತಿಯ ಬಲಭಾಗದಲ್ಲಿ ನಂದಿ ಹಾಗೂ ಎಡಭಾಗದಲ್ಲಿ ಗರುಡ ಮೂರ್ತಿಗಳಿರಬೇಕು. ಬಾದಾಮಿಯ ಹರಿಹರ ಮೂರ್ತಿಯಲ್ಲಿ ಶಿವನ ಜಟಾ ಮಕುಟ ಹಾಗೂ ವಿಷ್ಣು ವಿನ ಕಿರೀಟ ಮಕುಟ ಸ್ಪಷ್ಟವಾಗಿ ಕಾಣಬರುತ್ತದೆ. ಬಲಕಿವಿಯಲ್ಲಿ ಸರ್ಪಕುಂಡಲ ಎಡಭಾಗ ನಕ್ರ ಕುಂಡಲ ಗಳಿವೆ. ಹರಿಹರಮೂರ್ತಿಯ ಬಲಭಾಗದ ಹಿಂಭಾಗದ ಕೈ ಪರಶು (ಸರ್ಪ ಸುತ್ತಿಕೊಂಡಿದೆ), ಹಿಂಭಾಗದ ಎಡಗೈ ಶಂಖದಿಂದ ಕೂಡಿವೆ. ಬಲಭಾಗದ ಮುಂಭಾಗದ ಕೈ ಅಭಯಹಸ್ತದಿಂದ ಕೂಡಿರಬಹುದಾಗಿದೆ. ಎಡಗೈ ತೊಡೆಯ ಮೇಲಿದೆ. ತಲೆಯ ಹಿಂಭಾಗದಲ್ಲಿ ಶಿರಶ್ಚಕ್ರ ವಿದೆ. ಸಮಭಂಗದಲ್ಲಿ ಹರಿಹರಮೂರ್ತಿ ನಿಂತಿದೆ. ಬಲಭಾಗದಲ್ಲಿ ಪಾರ್ವತಿ, ಎಡಭಾಗದಲ್ಲಿ ಲಕ್ಷ್ಮಿ ಇದ್ದಾರೆ. ಪಾರ್ವತಿ ಮತ್ತು ಹರಿಹರಮೂರ್ತಿಯ ಮಧ್ಯೆ ನಂದಿ (ದಂಡಪಾಣಿಯಾಗಿ) ಮತ್ತು ಎಡಗಡೆ ಲಕ್ಷ್ಮಿ ಮತ್ತು ಹರಿಹರರ ಮಧ್ಯೆ ಕುಬ್ಜ ಗರುಡನ ಮೂರ್ತಿ ಇವೆ. ಪೀಠದ ಮೇಲೆ ಗಣಗಳ ಸಮೂಹ, ವಾದ್ಯವೃಂದ ಮತ್ತು ನರ್ತನದ ಮೂರ್ತಿಗಳಿವೆ.

ಗುಪ್ತಶೈಲಿಯ ಐದನೆಯ ಶತಮಾನದ ಗೋಕರ್ಣದ ಹರಿಹರಮೂರ್ತಿ ಸುಂದರವಾಗಿದೆ. ಬಲಭಾಗ ಜಟಾ ಮಕುಟ, ಚಂದ್ರನಿಂದ ಕೂಡಿದ್ದಾಗಿ, ತ್ರಿಶೂಲ (ಮೇಲ್ಭಾಗ ಮುರಿದಿದೆ) ಅಭಯ ಹಸ್ತದಿಂದ ಕೂಡಿದೆ. ಮುಂಡಿಯ

ತಳಭಾಗ ಮತ್ತು ಎಡಭಾಗ ವಿಷ್ಣುಭಾಗದ (ಹರಿಭಾಗದ) ಕೈಗಳು ಭಿನ್ನವಾಗಿವೆ. ಶಂಖವನ್ನು ಕಾಣಬಹುದು. ಕಂಠಹಾರವೊಂದನ್ನು ಬಿಟ್ಟರೆ ದೇಹದ ಮೇಲೆ ಯಾವ ಆಭರಣಗಳೂ ಇಲ್ಲ.

ಪೂನಾದ ಹರಿಹರಮೂರ್ತಿಯ ಶಿವನ ಭಾಗ ತ್ರಿಶೂಲ ಮತ್ತು ಅಕ್ಷಮಾಲೆಯಿಂದ ಕೂಡಿದೆ. ವಿಷ್ಣು ಭಾಗ ಗದೆ ಮತ್ತು ಶಂಖಗಳಿಂದ ಕೂಡಿದೆ. ಪಾರ್ವತಿ ಮತ್ತು ಲಕ್ಷ್ಮಿಯರು ಫಲ ಮತ್ತು ಪುಷ್ಪಗಳನ್ನು ಕೈಗಳಲ್ಲಿ ಹಿಡಿದಿದ್ದಾರೆ. ಎಡಭಾಗದಲ್ಲಿ ಮಂಡಿಯೂರಿ ಕುಳಿತಿರುವ ಗರುಡ, ಬಲಭಾಗದಲ್ಲಿ ನಿಂತಿರುವ ನಂದಿ ಇವೆ. ಹರಿಹರ ಮೂರ್ತಿ ಬಹಳ ಮುದ್ದಾಗಿದೆ. ಶಿಲ್ಪಿ ಆಭರಣಗಳನ್ನು ಸೂಕ್ಷ್ಮ ರೀತಿಯಲ್ಲಿ ತೀರಾ ಆಕರ್ಷಕವಾಗಿ ಬಿಡಿಸಿದ್ದಾನೆ.

ಹರಿಹರದ ಹರಿಹರೇಶ್ವರ ದೇವಾಲಯದ ಹರಿಹರ ಮೂರ್ತಿಯ ಮೂಲವಿಗ್ರಹ ಸುಮಾರು ೧೦.೮ ಸೆ. ಮೀ ಎತ್ತರವಿದೆ. ಹರಿಹರನ ಬಲಭಾಗ ಜಟಾಮುಕುಟ, ಎಡ ಭಾಗ ಮಣಿಮುಕುಟವಾಗಿವೆ. ಬಲಗೈಯಲ್ಲಿ ಅಭಯ, ತ್ರಿಶೂಲ; ಎಡಗೈಯಲ್ಲಿ ಸಂಹಾರ ಚಕ್ರ, ಶಂಖಗಳಿವೆ. ಇದರ ಕಾಲ ಸುಮಾರು ಐದನೆಯ ಶತಮಾನ. ಹಿಂದಿನ ಎರಡು ಕೈಗಳನ್ನು ಎರಡು ಕಂಬಗಳ ಮೇಲಿಟ್ಟಿರುವರು. ಮುಖವು ಅಗಲವಾಗಿ ಚಾಲುಕ್ಯ ರೀತಿಯಲ್ಲಿದೆ. ವಿಗ್ರಹ ದಲ್ಲಿ ಶಿರ, ಎದೆ, ಎಡತೊಡೆ ಹಳೆಯ ಭಾಗವಾಗಿದ್ದು, ಬಲತೋಳುಗಳು, ಎಡಭುಜ ಮತ್ತು ತೋಳುಗಳು ಈಚಿನವಾಗಿವೆಯೆಂದು ಡಾ॥ ಎಸ್. ಶ್ರೀಕಂಠಶಾಸ್ತ್ರಿ ಯವರ ಅಭಿಪ್ರಾಯ. ದೇವರಿಗೆ ಹಾರ, ಯಜ್ಞೋಪ ವೀತ, ಕಟಿಸೂತ್ರ ಮತ್ತು ಕೌಪೀನಗಳಿವೆ. ಧೋತಿ ಇಲ್ಲ. ಮೊಣಕಾಲವರೆಗೂ ಕಲ್ಲಿನ ಪೆಟ್ಟಿಗೆಯಲ್ಲಿ ಮುಚ್ಚಲಾಗಿದೆ. ಮೂಗು ಮತ್ತು ಮೂರ್ತಿಯನ್ನು ಗಾರೆಯಿಂದ ತಿದ್ದಿದೆ. ಭಿನ್ನವಾದ ವಿಗ್ರಹಪೂಜೆಯನ್ನು ಇಲ್ಲಿ ಕಾಣಬಹುದು.

ಚಿಕ್ಕಮಗಳೂರು ಶಿಲ್ಪಗಳಿಗೆ ಹಾಗೂ ದೇವಾ ಲಯಗಳಿಗೆ ಪ್ರಸಿದ್ಧವಾಗಿದೆ. ಹರಿಹರ ಮೂರ್ತಿ ಸಮಭಂಗದಲ್ಲಿದೆ. ಇದರ ಎತ್ತರ ೧.೫೦ ಸೆಂ. ಮೀ., ಅಗಲ ೭೪ ಸೆಂ. ಮೀ. ಹರಿಹರನ ಮುಕುಟ ಬಲಭಾಗದಲ್ಲಿ ಜಟಾ, ಎಡಭಾಗದಲ್ಲಿ ಮಣಿಮುಕುಟದಿಂದ ಅಲಂಕೃತ ವಾಗಿದೆ. ಬಲಗೈಗಳಲ್ಲಿ ಅಭಯ ತ್ರಿಶೂಲ ಡಮರುಗ, ಎಡಗೈಗಳಲ್ಲಿ ಪದ್ಮ, ಗದೆ, ಚಕ್ರ ಇವೆ. ಎಂಟು ಕೈಗಳಲ್ಲಿ ಎರಡು ಕೈಗಳು ಭಿನ್ನವಾಗಿವೆ. ಮುಖ ಉಜ್ಜಿದೆ. ಆಭರಣಗಳಿಂದ ಅಲಂಕೃತವಾಗಿರುವ ರೀತಿ ಹಾಗೂ ಆಯುಧಗಳನ್ನು ಹಿಡಿದಿರುವ ರೀತಿ ಹೊಯ್ಸಳ ಶೈಲಿಯಲ್ಲಿದೆ. ಬಲಕಿವಿಯಲ್ಲಿ ನಾಗಕುಂಡಲ, ಎಡಕಿವಿ ಯಲ್ಲಿ ಕುಂಡಲಗಳಿವೆ. ಬಲಭಾಗದಲ್ಲಿ ಡಮರುಗಳನ್ನು ಹಿಡಿದಿರುವ ರೀತಿ ಮುದ್ದಾಗಿದೆ. ಪ್ರಭಾವಳಿಯಲ್ಲಿ ದಶಾ ವತಾರವನ್ನು ಕಡೆಯಲಾಗಿದೆ. ಸಿಂಹಮುಖ ಸಹ ಇದೆ. ಎಡಭಾಗದಲ್ಲಿ ತೋಳ್ಬಂದಿ, ಸುಂದರವಾದ ನೀಳವಾದ ಹಾರ (ವೈಜಯಂತಿಮಾಲಾ), ಕಂಠಹಾರ, ಉದರಬಂಧ ಮತ್ತು ಮೇಖಲಾ(ಕಟಿಸೂತ್ರ)ಗಳನ್ನು ಕಾಣಬಹುದು.

ಹರನ ಭಾಗದಲ್ಲಿ ವೀರಭದ್ರನ ವ್ಯಕ್ತಿತ್ವವನ್ನು ಹಾಗೂ ನಾಗಬಂಧವನ್ನು ವಿಶಿಷ್ಟವಾಗಿ ಕಾಣಬಹುದು. ಹರಿಹರಮೂರ್ತಿಯ ಪಕ್ಕದಲ್ಲಿ ದೇವಿಯರು (ಪತ್ನಿ ಯರು) ನಿಂತಿದ್ದಾರೆ. ಪಾರ್ವತಿ ಅಂಕುಶ, ಪಾಶವನ್ನು ಹಿಂಭಾಗದ ಎರಡು ಕೈಗಳಲ್ಲಿ ಹಿಡಿದಿದ್ದಾಳೆ.

ತೋರಣದ ಮಧ್ಯೆ ಸಿಂಹಮುಖವಿದೆ. ಹರನ ಭಾಗದಲ್ಲಿ ರುದ್ರರನ್ನು, ಹರಿಯ ಭಾಗದಲ್ಲಿ ದಶಾವತಾರ ಗಳನ್ನು ಬಿಡಿಸಿದ್ದಾರೆ. ಜಟಾಮುಕುಟ ತಾಂಡವ ಶಿವನ ಚಿಹ್ನೆಯಿಂದ ಕೂಡಿದೆ. ಇವುಗಳೆಲ್ಲವೂ ವಿಶಿಷ್ಟವಾಗಿವೆ. ಶಿವನ ಭಾಗದ ಜಟಾಮುಕುಟದಲ್ಲಿ ನಾಲ್ಕು ಬುರುಡೆಗಳನ್ನು ಬಿಡಿಸಲಾಗಿದೆ.

### ಆಧಾರ ಗ್ರಂಥಗಳು


1. Elements of Hindu Iconography, Vol. II, Part I, 1971
2. ಡಾ॥ ಎಸ್. ಶ್ರೀಕಂಠಶಾಸ್ತ್ರಿ : ಹೊಯ್ಸಳ ವಾಸ್ತುಶಿಲ್ಪ, ೧೯೭೫